ಎಷ್ಟು ಒಳ್ಳೆಯ ಉದ್ದೇಶದಿಂದಲೇ ಆದರೂ ವಾಲ್ಮೀಕಿಯ ರಾಮನನ್ನು ಉತ್ತರಕಾಂಡದ ಆಭಾಸ ರಾಮನಾಗಿ ಮಾರ್ಪಡಿಸಿದ ಆಭಾಸ ವಾಲ್ಮೀಕಿಯ ಕಾವ್ಯವನ್ನು ಮತಗ್ರಂಥದ ಸ್ಥಾನದಿಂದ ಇಳಿಸಿ ರಾಮಸ್ವಾಮಿನಾಯಕರಂಥ ಜನರ, ಅವರ ಅನುಯಾಯಿಗಳ, ಕೈಯಿಂದ ಕೆರಗಳ ಮಾಲೆಯನ್ನು ಹಾಕಿಸಿಕೊಳ್ಳುವ ಪಾಡಿನಿಂದ ಶ್ರೀರಾಮನನ್ನು ರಕ್ಷಿಸಬೇಕು.

ದ್ರಾವಿಡ ಕಳಗಂ ಮುಂತಾದ ಸಂಸ್ಥೆಗಳು ತಮ್ಮದೇ ಆದ ಹಿಂದೂ ಸಮಾಜದ ಬೇರೆ ಸಮುದಾಯದ ಜನವನ್ನು ಹಗೆಗಳಂತೆ ಕಂಡು ಹಿಂಸಿಸುವ ಕ್ರಮ ಆತ್ಮಹನನ ಎಂದು ಪ್ರಚಾರ ನಡೆಸಿ, ಈ ದುಷ್ಟಪ್ರವೃತ್ತಿ ಮತ್ತೆ ತಲೆ ಎತ್ತದಂತೆ ಮಾಡಿ ನಮ್ಮ ಸಮಾಜವನ್ನು ಒಂದಾಗಿ ಉಳಿಸಿ ರಕ್ಷಿಸಬೇಕು.

ಹಿಂದೂ ಸಮಾಜ ಉಚ್ಚ ನೀಚ ಎಂಬ ಭಾವನೆಗಳಿಂದ ಛಿದ್ರವಾಗದ ಒಂದೇ ಆದ ಸಮಾಜ ಎಂಬ ತತ್ತ್ವವನ್ನು ನಮ್ಮ ಸಮಾಜದ ಎಲ್ಲ ಜನರಿಗೂ ಮನದಟ್ಟಾಗುವಂತೆ ಮಾಡಬೇಕು.

ಸನಾತನ ಧರ್ಮದ ಮೂಲಸೂತ್ರಗಳನ್ನು ಸಂಗ್ರಹಿಸಿ ಒಂದು ಕೈಪಿಡಿಯನ್ನು ಪ್ರಕಟಿಸಿ ನಮ್ಮ ಧರ್ಮದ ಉನ್ನತ ಭಾವಗಳು ಜನಸಾಮಾನ್ಯರಲ್ಲಿ ಎಲ್ಲರಿಗೂ ತಿಳಿಯುವಂತೆ ಮಾಡಬೇಕು. ಉದ್ಧಾರಕ್ಕೆ ಸಾಧಕವಾದ ಯಾವ ಸಂಗತಿಯೂ ರಹಸ್ಯವಾಗಿ ಉಳಿಯಬಾರದು. ಕರ್ಮದಲ್ಲಿ ಗುಟ್ಟುಗಳು ಬೇಡ, ಎಲ್ಲವೂ ರಟ್ಟಾಗಿರಲಿ.

ಕ್ಷೇತ್ರಗಳನ್ನು ತೀರ್ಥಗಳನ್ನು ಕುರಿತು ಅತಿರೇಕದ ನಂಬಿಕೆಯಿಂದ ನಡೆಯುತ್ತಿರುವ ಇಂದಿನ ನಮ್ಮ ಕ್ರಮವನ್ನು ತಿದ್ದಿ, ತಪ್ಪು ತಿಳುವಳಿಕೆ, ಕುರುಡು ನಂಬಿಕೆ, ಮೂಢಭಕ್ತಿ, ಭೀತಿ, ಎಂದು ಮುಂತಾಗಿ ಈ ಮುನ್ನ ವಿವರಿಸಿರುವ ಭಾಗಗಳು ಅಸಾಧು ಎಂದು ಸ್ಪಷ್ಟವಾಗಿ ಸಾರಿ ನಮ್ಮ ಜನವನ್ನು ಈ ತಪ್ಪುಗಳ ಮುಷ್ಟಿಯಿಂದ ಬಿಡಿಸಿ ಸಂರಕ್ಷಿಸಬೇಕು.

ಗುರುಪೀಠಗಳಲ್ಲಿ ಬಾಲಸಂನ್ಯಾಸಿಗಳನ್ನು ನಿಯಮಿಸುವುದು ಸಂನ್ಯಾಸ ಸಿದ್ಧಿಸದಂತೆ ಮಾಡಿದೆ ಎನ್ನುವುದನ್ನು ಮನಗಂಡು, ಸಂನ್ಯಾಸ ಗೃಹಸ್ಥಾಶ್ರಮದ ಅನಂತರ ವಾನಪ್ರಸ್ಥದಲ್ಲಿ ಕೆಲವುಕಾಲ ನಡೆದಮೇಲೆ ಮಾತ್ರ ಗ್ರಹಿಸಬಹುದಾದ ಆಶ್ರಮ ಎಂದು ನಿಯಮಮಾಡಿ ಗುರುಪೀಠಗಳ ಪಾವಿತ್ರ್ಯವನ್ನು ಸಂರಕ್ಷಿಸಬೇಕು.

ಪವಾಡಗಳನ್ನು ಮಾಡಿ ವಿಚಿತ್ರ ಶಕ್ತಿಗಳನ್ನು ಪ್ರಕಟಿಸಿ ಜನರನ್ನು ಆಕರ್ಷಿಸುವ ಚತುರ ಜನರು ಶುದ್ಧ ಧರ್ಮದ ಪ್ರವರ್ತಕರಲ್ಲ. ಈ ಸತ್ಯವನ್ನು ಪ್ರಕಟಿಸಿ ಧರ್ಮದ ಆಚಾರ್ಯ ಸ್ಥಾನಗಳ ಮರ್ಯಾದೆಯನ್ನು ಸಂರಕ್ಷಿಸಬೇಕು.

## ರಕ್ಷಕ ಸಂಸ್ಥೆಗಳು

ವಿಶ್ವ ಹಿಂದೂ ಪರಿಷತ್ತು ಇದನ್ನೆಲ್ಲ ಮಾಡಬೇಕು, ಮಾಡಬಲ್ಲದು. ಲೋಕಹಿತೈಷಿಗಳಾದ ಬಲ್ಲ ಜನರು ಸಮಿತಿಯೊಂದನ್ನು ರಚಿಸಿ ಮಾಡಬೇಕಾದ ಬೇರೆ ಕೆಲಸ ಏನಿದೆ ಅದನ್ನು ನಿರ್ಧರಿಸಬೇಕು. ಹೀಗೆ ಮಾಡುವಲ್ಲಿ ಮುಖ್ಯವಾಗಿ ನಮ್ಮ ಧರ್ಮದ ಸುಧಾರಕ ಪಂಥಗಳೆಲ್ಲವುಗಳ ಪ್ರಮುಖರ ಸಲಹೆಗಳನ್ನು ಪಡೆಯಬೇಕು.

ರಾಷ್ಟ್ರದಾದ್ಯಂತ ಈ ಕಾರ್ಯಕ್ರಮವನ್ನು ಕೈಗೊಳ್ಳಬೇಕಾದರೆ ಸಂಸ್ಥೆ ರಾಷ್ಟ್ರದ ಒಂದೊಂದು ರಾಜ್ಯದಲ್ಲೂ ಒಂದು ಶಾಖೆಯನ್ನು ನಿರ್ಮಿಸಿ ಆಯಾ ಪ್ರಾಂತದಲ್ಲಿ ಕೆಲಸ ನಡೆಯಲು ಏರ್ಪಾಡು ಮಾಡಬೇಕು.

ಈ ಬಗ್ಗೆ ಬೇಕಾಗುವ ಹಣವನ್ನು ಮುಖ್ಯವಾಗಿ ಹಿಂದೂ ಸಮಾಜದಿಂದ ಚಂದಾಹಣ, ಪ್ರದಾನ, ಪೋಷಕ ಧನ, ಮುಂತಾದ ರೂಪಗಳಲ್ಲಿ ಪಡೆದು, ಒಂದು ನಿಧಿಯಾಗಿ ಮಾಡಿ, ಈ ಶಾಖೆಗಳು ಅದರ ಆಯವ್ಯಯದ ವ್ಯವಹಾರವನ್ನು ಸತ್ಯವಂತ ಸಮರ್ಥ ಆದ ಒಂದು ಸಮಿತಿಗೆ ವಹಿಸಬೇಕು.

ಪ್ರಚಾರ ಕಾರ್ಯದಲ್ಲಿ ಪರಿಷತ್ತು ಶ್ರೀ ರಾಮಕೃಷ್ಣ ವಿವೇಕಾನಂದರ ಪ್ರತಿಷ್ಠಾನದ ಸಹಾಯವನ್ನು ಪಡೆದು ಅದರ ಶಾಖೆಗಳ ಮೂಲಕ ಪ್ರಚಾರ ನಡೆಸಿದರೆ ಕೆಲಸ ಸ್ವಲ್ಪ ಸುಲಭ ಆಗುತ್ತವೆ.

ಈ ಕೆಲಸದಲ್ಲಿ ಸಹಾಯ ಮಾಡುವುದು ಈ ಪ್ರತಿಷ್ಠಾನದ ಕಾರ್ಯಕ್ರಮದ ಒಂದು ಅಂಗವೇ ಆಗುತ್ತದೆ. ಸ್ವಾಮಿ ವಿವೇಕಾನಂದರು ತಮ್ಮ ಗುರು ಪರಮಹಂಸರ ಶಿಷ್ಯರು ಈ ಕೆಲಸವನ್ನು ಮಾಡಬೇಕೆಂದು ಬಯಸಿದರು. ಸಂಸ್ಥೆ ಈಗ ಸ್ವಾಮಿಗಳ ನಿರ್ದೇಶದ ಈ ಭಾಗದಲ್ಲಿ

ಶಕ್ತ ರೀತಿಯಲ್ಲಿ ಶ್ರಮಿಸುತ್ತಿಲ್ಲ. ಸದ್ಯದ ನಮ್ಮ ಸ್ಥಿತಿಯಲ್ಲಿ ಇದು ಸಂಸ್ಥೆಯ ಕಾರ್ಯಕ್ರಮದಲ್ಲಿ ಒಂದು ಕೊರತೆಯೇ ಆಗಿದೆ. ಈ ಕೊರತೆಯನ್ನು ನೀಗಿ, ಪ್ರಚಾರ ನಡೆಸುವುದರಿಂದ ಸಂಸ್ಥೆ ಸ್ವಾಮಿಯ ಅಪ್ಪಣೆಯನ್ನು ನಡೆಸಿದಂತಾಗುವುದು.

ಪ್ರಚಾರಕ್ಕೆ ಅವಶ್ಯಕವಾದ ಸಾಹಿತ್ಯವನ್ನು ಬರೆಯಿಸುವುದು, ರಾಜ್ಯಗಳಾದ್ಯಂತ ಐದು ಗ್ರಾಮ ಹತ್ತು ಗ್ರಾಮಕ್ಕೆ ಒಂದು ಎಂಬಂತೆ ಉಪಶಾಖೆಗಳನ್ನು ನಿರ್ಮಿಸುವುದು. ಆಯಾ ಗ್ರಾಮ ಸಮುದಾಯದಲ್ಲಿ ಪ್ರಚಾರಕ್ಕೆ ಒಬ್ಬ ಪ್ರಚಾರಕರನ್ನು ನೇಮಿಸುವುದು, ಇವರು ಈ ಕೆಲಸಮಾಡಲು ಇವರಿಗೆ ತಕ್ಕ ಶಿಕ್ಷಣವನ್ನು ಕೊಡುವುದು, ಕಾರ್ಯಕ್ರಮದ ಅವಶ್ಯ ಭಾಗಗಳು. ಪ್ರಚಾರಕರಿಗೆ ಯುಕ್ತ ವೇತನವನ್ನು ಕೊಟ್ಟರೆ ತಕ್ಕಷ್ಟು ಸಂಖ್ಯೆಯಲ್ಲಿ ಧರ್ಮದ ಸೇವೆಗೆ ಜನ ದೊರಕಿಯಾರು.

ಇದಿಷ್ಟು ಕಾರ್ಯವನ್ನೂ ಹಿಂದೂ ಧರ್ಮವನ್ನು ಸಂರಕ್ಷಿಸುವ ದೃಷ್ಟಿಯಿಂದ ಮಾಡುವಲ್ಲಿ ಹಿಂದೂ ಧರ್ಮ ತನ್ನನ್ನು ತಾನು ರಕ್ಷಿಸಿಕೊಳ್ಳುವುದಲ್ಲದೆ, ಸದ್ಯ ಪ್ರಪಂಚದಲ್ಲಿ ಪ್ರಭಾವವನ್ನು ಕಳೆದುಕೊಳ್ಳುತ್ತಿರುವ ಇತರ ಧರ್ಮಗಳನ್ನು ರಕ್ಷಿಸುವ ಕಾರ್ಯದ ತಳಹದಿಯನ್ನೂ ಹಾಕುತ್ತದೆ.

ಹಿಂದೂ ಧರ್ಮ ಬೇರೆ ಮತಗಳನ್ನು ನೀತಿಯಿಂದ ನೋಡುವ ಧರ್ಮ. ಸನಾತನ ಧರ್ಮದ ಅನುಯಾಯಿಗೆ ಮನುಜಕುಲವನ್ನು ರಕ್ಷಿಸುವ ಎಲ್ಲ ಮತಗಳೂ ಅಂಗೀಕಾರಾರ್ಹ. ವಸುಧೆಯೆಲ್ಲ ಒಂದು ಕುಟುಂಬ.

ವೇದಗಳ ಕಾಲದ ಋಷಿಗಳ ಲೋಕ, ಜಾರತೂಷ್ಟ್ರ ಮಹರ್ಷಿಯಲೋಕ, ಯೆಹೂದ್ಯ ಪ್ರವಾದಿಗಳ ಲೋಕ, ಬುದ್ಧಕ್ರೀಸ್ತ ಮಹಮ್ಮದ್ ಗುರುಗಳ ಲೋಕ, ಇವೆಲ್ಲ ಲೋಕಗಳು ಅವರವರು ಕಂಡ ಒಂದು ಅಳತೆಯ ಲೋಕಗಳು. ಈಗ ನಾವು ಲೋಕ ಎನ್ನುವುದು ಅಂದಿನ ಅಳತೆಗಳನ್ನು ಮೀರಿದ ವಿಸ್ತಾರವಾದ ಒಂದು ಲೋಕ ವಿಸ್ತಾರದ ಕಾರಣದಿಂದ ಇದು ಬೇರೆ ಲೋಕ ಎಂದೇ ಹೇಳಬಹುದು ಸನಾತನ ಧರ್ಮ ಎಲ್ಲ ಕಾಲ ಎಲ್ಲ ದೇಶಗಳಿಗೆ ಅನ್ವಯಿಸಬಲ್ಲ ಧರ್ಮ ಆಗಬೇಕು ಎಂದು ಬಯಸಿದ ಧರ್ಮ. ಇತರ ಗುರುಗಳೂ ಇದನ್ನೇ ಬಯಸಿದರು. ಈಗ ಈ ಗುರಿಯನ್ನು ಸಾಧಿಸಬೇಕಾದರೆ ಈ ಮತಗಳು ಈ ವಿಸ್ತಾರವಾದ ಲೋಕವನ್ನು ಗಣನೆಗೆ ತೆಗೆದುಕೊಳ್ಳಬೇಕು ಈ ದೃಷ್ಟಿಯಿಂದ ಧರ್ಮದ ಮೂಲಪ್ರೇರಣೆಗಳನ್ನು ಕುರಿತ ಇದುವರೆಗಿನ ತಿಳುವಳಿಕೆಗಳನ್ನು ತಿದ್ದಿಕೊಳ್ಳಬೇಕು.

ಇತಿಹಾಸದ ಇಂದಿನ ಘಟ್ಟ ಲೋಕವನ್ನೆಲ್ಲ ಸೇರಿಸಿ ನಡೆಸಬಲ್ಲ ಒಂದು ಧರ್ಮವನ್ನು ಬಯಸುತ್ತಿದೆ. ಈ ಒಂದು ಧರ್ಮ ರೂಪುಗೊಳ್ಳುವುದಕ್ಕೆ ಭರತವರ್ಷದಷ್ಟು ಅನುವಾದ ದೇಶ

ಇನ್ನೊಂದಿಲ್ಲ ಬೇರೆ ಎಲ್ಲ ಎಡೆಯಲ್ಲಿ ಒಂದೋ ಎರಡೋ ಧರ್ಮ ಮಾತ್ರ ಪ್ರಚಾರದಲ್ಲಿರುವಲ್ಲಿ ಭಾರತ ಲೋಕದ ಸಮಸ್ತ ಮತಗಳ ಅನುಯಾಯಿಗಳ ಸಂಗ್ರಹಮಂದಿರವಾಗಿದೆ. ಇದರಿಂದ ಇಲ್ಲಿ ಎಲ್ಲ ಮತಗಳ ಶ್ರದ್ಧಾವಂತ ಪ್ರತಿನಿಧಿಗಳೂ ದೊರಯುತ್ತಾರೆ. ಸ್ವಲ್ಪ ಯೋಚನೆ ಮಾಡಿದರೆ ಇವರೆಲ್ಲ ಲೋಕಕ್ಷೇಮಕ್ಕೆ ತಮ್ಮ ಎಲ್ಲ ಮತಗಳ ಸಮನ್ವಯನ ಒಂದೇ ದಾರಿ ಎಂದು ಕಾಣುತ್ತಾರೆ. ಈ ಬಗ್ಗೆ ತಕ್ಕ ಪ್ರಚಾರ ನಡೆಯಬೇಕು ಅಷ್ಟೆ. ನಮ್ಮ ದೇಶದ ಇಸ್ಲಾಂ ಕ್ರೈಸ್ತ ಮತಗಳ ಹಿರಿಯರು ಸಮನ್ವಯನ ಲೋಕಕ್ಕೆ ಕ್ಷೇಮವನ್ನು ತರುವುದಲ್ಲದೆ ತಮ್ಮ ಮತವನ್ನೂ ಸಾರ್ಥಕ ಮಾಡುತ್ತದೆ ಎನ್ನುವದನ್ನು ಕಾಣಬೇಕು. ಈ ನಮ್ಮ ಸೋದರ ಭಾರತೀಯರ ಮನಸ್ಸು ಈ ದಿಕ್ಕಿನಲ್ಲಿ ಹರಿಯುವಂತೆ ಮಾಡುವುದು ಹಿಂದೂ ಮತದ ನಾಯಕರ ಕರ್ತವ್ಯ. ಇದು ಸಾಧ್ಯವೇ ಎಂದು ಸಂದೇಹಪಡುವುದು ಬೇಡ. ಆಗಬೇಕಾದ ಕಾರ್ಯ ಸುಲಭ ಅಲ್ಲ, ದಿಟ. ಆದರೆ ಅಷ್ಟರಿಂದ ಇದು ಸಾಧ್ಯ ಅಲ್ಲ ಎಂದು ಕೈಬಿಡುವುದು ಯುಕ್ತವಲ್ಲ. ಹೀಗಲ್ಲದೆ ಲೋಕ ಉಳಿಯುವಂತಿಲ್ಲ ಆದ್ದರಿಂದ ಇದನ್ನು ಸಾಧಿಸಲೇಬೇಕು.

ಆಯಿತು, ಈ ದುಸ್ಸಾಧ್ಯವಾದ ಕಾರ್ಯವನ್ನು ಕೈಕೊಳ್ಳಲು ನಾವು ಶಕ್ತರೇ? ನಮಗೆ ತಕ್ಕ ತಿಳಿವಳಿಕೆ ಇದೆಯೇ?

ಈ ವಿಷಯದಲ್ಲಿ ಶಂಕೆ ಬೇಡ. ಈವರೆಗೆ ಸತ್ಯವಂತ ಚೇತನರಿಗೆ ನಿತ್ಯ ಕಲ್ಯಾಣತತ್ವ ತನ್ನ ಇಚ್ಛೆಯನ್ನು ತಿಳಿಸುತ್ತ ಬಂದಿದೆ. ಆ ಇಚ್ಛೆಯನ್ನು ತಿಳಿದೇ ಎಲ್ಲ ದೇಶಗಳಲ್ಲಿಯೂ ಇಂಥ ಚೇತನಗಳು ಮನುಜಕುಲದ ಕಲ್ಯಾಣಕ್ಕಾಗಿ ತಾವು ಹೀಗೆ ತಿಳಿದ ಸತ್ವವನ್ನು ಪ್ರಕಟಿಸಿದವು. ಸ್ವಾರ್ಥವನ್ನು ತೊರೆದು ಲೋಕಕಲ್ಯಾಣ ದೃಷ್ಟಿಯಿಂದ ನಮ್ಮ ದಿನಕ್ಕೆ ತಕ್ಕದಾದ ಧರ್ಮವನ್ನು ರೂಪಿಸಬೇಕೆಂದು ಇಂದಿನ ಸತ್ಕವಂತ ಧರ್ಮಿಷ್ಠ ಚೇತನರೆಲ್ಲ ಮನಸ್ಸು ಮಾಡಿದರೆ ಅವರಿಗೆ ಅಂತರ್ಯಾಮಿ ದೈವ ಮನುಜಕುಲದ ಕ್ಷೇಮಕ್ಕೆ ದಾರಿ ಯಾವುದು ಎಂಬುದನ್ನು ಸ್ಪಷ್ಟವಾಗಿ ಹೇಳುತ್ತದೆ, ಆ ಹೇಳಿದ ಸಂಗತಿ ಇವರಿಗೆ ಸ್ಪಷ್ಟವಾಗಿ ಕೇಳುತ್ತದೆ. ಇವರು ಅದನ್ನು ಜನಕ್ಕೆ ಸ್ಪಷ್ಟವಾಗಿ ತಿಳಿಸಬಹುದು. ಆಗ ಜನತೆ ಅದನ್ನು ಸಂತೋಷದಿಂದ ಒಪ್ಪಿಕೊಳ್ಳುತ್ತದೆ. ಹೀಗೆ ಶ್ರುತವಾದ ಸಂಗತಿ ಹಿಂದೆ ಎಲ್ಲ ಧರ್ಮಗಳಲ್ಲೂ ಬರೆದಿಟ್ಟಿರುವ ಸಂಗತಿಗಳಂತೆ ಲೋಕದ ಹೊಸ ಕಾಲದ ಸ್ಮೃತಿ, ಸೂತ್ರ, ಆಗುತ್ತದೆ.